# ಸಂಕೀರ್ಣ ಸಮಾಜಗಳಲ್ಲಿ ಶಿಕ್ಷಣ

**ಅಮನ್ ಮದಾನ್**

ಭಾರತದಲ್ಲಿ ಇಂದು ಶಿಕ್ಷಣವು ವಿವಿಧ ರೀತಿಯ ಸಾಮಾಜಿಕ ಬದಲಾವಣೆಗಳ ಕವಲುದಾರಿಯಲ್ಲಿ ನಿಂತಿದೆ. ಇವು ಶೈಕ್ಷಣಿಕ ಪ್ರಶ್ನೆಗಳನ್ನು ಮೂಲಭೂತ ರೀತಿಯಲ್ಲಿ ಪ್ರಭಾವಿಸುತ್ತಿವೆ. ಈ ಸರಣಿಯಲ್ಲಿ ಮೊದಲಿಗೆ, ನಮ್ಮ ಹಲವಾರು ಸಾಂಸ್ಕೃತಿಕ ನಂಬಿಕೆಗಳು, ಮೌಲ್ಯಗಳು ಮತ್ತು ಆಚರಣೆಗಳನ್ನು ಬುಡಮೇಲಾಗಿಸುತ್ತಿರುವ ಸರಳತೆಯಿಂದ ಸಂಕೀರ್ಣ ಸಮಾಜದ ಕಡೆಗಿನ ಬದಲಾವಣೆಯ ಪ್ರಕ್ರಿಯೆಯನ್ನು ಪರಿಶೀಲಿಸೋಣ. ಹೀಗೆಂದರೆ ಏನು ಮತ್ತು ಇದಕ್ಕೆ ಕಾರಣವೇನು ಎಂಬುದನ್ನು ತಿಳಿಯಲು ಸಾಮಾಜಿಕ ರಚನೆಗಳಲ್ಲಿ ಹಲವಾರು ಪಾತ್ರಗಳನ್ನು ನಿರ್ವಹಿಸುತ್ತಾ ನಾವು ನಮ್ಮ ಜೀವನವನ್ನು ನಡೆಸುತ್ತೇವೆ ಎಂಬ ಸಮಾಜಶಾಸ್ತ್ರೀಯದ ಕೆಲವು ಮೂಲ ಪರಿಕಲ್ಪನೆಗಳಿಂದ ಪ್ರಾರಂಭಿಸೋಣ. ಒಂದು ರೀತಿಯ ಸಾಮಾಜಿಕ ರಚನೆಯಲ್ಲಿ ಪಾತ್ರವನ್ನು ನಿರ್ವಹಿಸುವುದು ಮತ್ತು ಇನ್ನೊಂದರಲ್ಲಿ ನಿರ್ವಹಿಸದೇ ಇರುವ ವಾಸ್ತವವು ನಮ್ಮ ಹಲವಾರು ಪ್ರಮುಖ ಚಿಂತನೆಗಳು ಮತ್ತು ಭಾವನೆಗಳನ್ನು ರೂಪಿಸಲು ಕಾರಣವಾಗುತ್ತದೆ.

## ಪಾತ್ರಗಳು ಮತ್ತು ರಚನೆಗಳು

ನಮ್ಮ ಸಾಮಾಜಿಕ ಜೀವನದಲ್ಲಿ ನಾವು ಇತರರೊಂದಿಗೆ ಕೆಲವು ರೀತಿಯ ಸಂಬಂಧಗಳನ್ನು ಹೊಂದಿದ್ದೇವೆ ಎಂಬುದು ಸಮಾಜಶಾಸ್ತ್ರದ ಕೇಂದ್ರೀಯ ವಿಚಾರವಾಗಿದೆ. ಇವುಗಳು ನನ್ನ ಮತ್ತು ನನ್ನ ಪ್ರೀತಿಪಾತ್ರರ ನಡುವಿನ ಪ್ರೀತಿಯ ಸಂಬಂಧ, ನನ್ನ ಮೇಲೆ ಪ್ರಾಬಲ್ಯವನ್ನು ಸಾಧಿಸಲು ಪ್ರಯತ್ನಿಸುವವರ ಹಾಗೂ ನನ್ನ ನಡುವಿನ ದ್ವೇಷ, ನಾನು ಮೆಚ್ಚುವವರ ಕೆಲಸ ಮತ್ತು ಅವರ ಚಿಂತನೆಗಳ ಬಗ್ಗೆ ಗೌರವ ಇನ್ನೂ ಮುಂತಾದ ಸಂಬಂಧಗಳಾಗಿರಬಹುದು. ಶಾಲೆಯಲ್ಲಿನ ಕಲಿಕೆ ಗುಣವು ಶಿಕ್ಷಕ ಹಾಗೂ ಅವರ ವಿದ್ಯಾರ್ಥಿಯ ನಡುವಿನ ಸಂಬಂಧಗಳಿಂದ ರೂಪುಗೊಳ್ಳುತ್ತದೆ. ಸಮಾಜದಲ್ಲಿ ಇಂತಹ ಕೆಲವೊಂದು ಸಂಬಂಧಗಳಲ್ಲಿ ಬಹಳ ಬೇಗ ಬದಲಾವಣೆಯಾದರೆ ಇನ್ನೂ ಕೆಲವು ನಿಯತ ಮತ್ತು ಅಂಗೀಕೃತವಾದಂತಹ ರೂಪಗಳನ್ನು ಹೊಂದಿರುವುದನ್ನು ಕಾಣಬಹುದು. ಉದಾಹರಣೆಗೆ, ಒಂದು ಸಮಾಜದಲ್ಲಿ ಆಹಾರವನ್ನು ಉತ್ಪಾದಿಸುವವರು ಹಲವರು, ವಿತರಕರು ಹಲವರು ಹಾಗೂ ಗ್ರಾಹಕರು ಹಲವರಿರಬಹುದು. ಇವರಲ್ಲಿ ಪ್ರತಿಯೊಬ್ಬರೂ ಇನ್ನೊಬ್ಬರೊಂದಿಗೆ ನಿರ್ದಿಷ್ಟವಾದ ಸಂಬಂಧವನ್ನು ಹೊಂದಿದ್ದಾರೆ. ನಾವು ಪಾತ್ರಗಳು ಎಂದು ಹೇಳುವಂತಹವುಗಳು ಸಾಪೇಕ್ಷವಾಗಿ ಸ್ಥಿರ ಸಂಬಂಧಗಳಾಗಿದ್ದು, ರೈತ, ತರಕಾರಿ ಮಾರುವವ ಹಾಗೂ ಗ್ರಾಹಕ ಈ ಉದಾಹರಣೆಯಲ್ಲಿ ಪಾತ್ರಗಳಾಗುತ್ತಾರೆ. ಕೆಲವೊಮ್ಮೆ ಎಲ್ಲ ಪಾತ್ರಗಳೂ ಒಬ್ಬ ವ್ಯಕ್ತಿಯಲ್ಲಿ ಒಂದುಗೂಡಿದರೆ ಇನ್ನೂ ಕೆಲವೊಮ್ಮೆ ಇವು ವಿಭಿನ್ನ ಪಾತ್ರಗಳಾಗುತ್ತವೆ. ಇವು ಒಂದುಗೂಡಿದಾಗ ಯಾವುದೇ ರೀತಿಯ ಶೋಷಣೆ ಅಥವಾ ದಬ್ಬಾಳಿಕೆಗೆ ಅವಕಾಶವಿರುವುದಿಲ್ಲ. ಆದರೆ, ಅವುಗಳು ಬೇರೆ ಬೇರೆಯಾದಾಗ ದಬ್ಬಾಳಿಕೆಯ ಸಾಧ್ಯತೆಯು ಇರುತ್ತದೆ. ಆದರೆ, ಒಂದು ನಿಯಮವಾಗಿ ಯಾವಾಗಲು ಅಸ್ತಿತ್ವದಲ್ಲಿರುವುದಿಲ್ಲ. ಉದಾಹರಣೆಗೆ, ತರಕಾರಿ ಮಾರುವವನು ಹೆಚ್ಚಿನ

ಲಾಭಗಳಿಸುತ್ತಿದ್ದು ನಾನು ಕಡಿಮೆ ಹಣ ಪಡೆಯುತ್ತಿರುವುದರಿಂದ ಶೋಷಣೆಗೆ ಒಳಗಾಗುತ್ತಿದ್ದೇನೆ ಎಂದು ರೈತನು ಭಾವಿಸಬಹುದು. ಸಮಾಜದಲ್ಲಿ ಇನ್ನೂ ಹಲವಾರು ರೀತಿಯ ಪಾತ್ರಗಳಿರಬಹುದು. ವಿವಿಧ ರೀತಿಯ ಪಾತ್ರಗಳು ಮತ್ತು ವಿವಿಧ ರೀತಿಯ ಸಂಬಂಧಗಳನ್ನು ಆ ಸಮಾಜದ ರಚನೆ ಎಂದು ನೋಡಬಹುದು. ಹಾಗೂ, ಅದರಲ್ಲಿ ಹಲವು ರೀತಿಯ ರಚನೆಗಳಿರಬಹುದು.

ಪಾತ್ರದ ರಚನೆಗಳು ನಮ್ಮ ಜೀವನದ ಮೇಲೆ ಅಗಾಧವಾದ ಪ್ರಭಾವವನ್ನು ಹೊಂದಿವೆ. ಒಂದು ರೀತಿಯ ಸಾಮಾಜಿಕ ರಚನೆಯಲ್ಲಿ ವಿದ್ಯಾರ್ಥಿ ಮತ್ತು ಶಿಕ್ಷಕರ ಅನುಭವವು ಮತ್ತೊಂದು ರೀತಿಯ ಸಾಮಾಜಿಕ ರಚನೆಯಲ್ಲಿನ ಅನುಭವಕ್ಕಿಂತ ಭಿನ್ನವಾಗಿರಬಹುದು. ಉದಾಹರಣೆಗೆ; ಒಂದು ರೀತಿಯ ಸಾಮಾಜಿಕ ರಚನೆಯಲ್ಲಿ ಶಿಕ್ಷಕನು ಕಲಿಯುವವರಿಗೆ ಪ್ರೀತಿ ಮತ್ತು ಭಾವನಾತ್ಮಕವಾಗಿ ಮಾರ್ಗದರ್ಶನ ಮಾಡುವುದರ ಮೂಲಕ ಕುಟುಂಬದ ಹಿರಿಯ ಸದಸ್ಯನಂತೆ ಕಾಣಬಹುದು. ಆದರೆ, ಮತ್ತೊಂದು ರೀತಿಯ ಸಾಮಾಜಿಕ ರಚನೆಯಲ್ಲಿ ಶಿಕ್ಷಕನು ಒಬ್ಬ ಅಧಿಕಾರಿಯ ಹಾಗೆ ನಿಯಮಗಳ ಪುಸ್ತಕದಲ್ಲಿರುವ ನೀತಿ ನಿಯಮಗಳ ಅನುಸಾರ ವಿದ್ಯಾರ್ಥಿಯ ಕಲಿಕೆಯನ್ನು ರೂಪಿಸಬಹುದು. ವಿಭಿನ್ನ ಸಮಾಜಗಳು ಪರಸ್ಪರ ವಿರುದ್ಧವಾದ ರಚನೆಗಳನ್ನು ಹೊಂದಿರಬಹುದು, ಅಥವಾ ಒಂದೇ ರೀತಿಯ ಸಮಾಜದಲ್ಲಿ ವಿಭಿನ್ನ ಶಾಲೆಗಳು ವಿಭಿನ್ನ ರಚನೆಯನ್ನು ಹೊಂದಿರಬಹುದು. ಒಂದು ಶಾಲೆಯಿಂದ ಇನ್ನೊಂದು ಶಾಲೆಗೆ ಬದಲಾಗುವ ವಿದ್ಯಾರ್ಥಿಯು "ಏನೋ ಒಂದು" (something) ಬದಲಾವಣೆಯಾಗಿದೆ ಎಂದು ಕೂಡಲೇ ಗ್ರಹಿಸುತ್ತಾನೆ. ಒಂದು ರೀತಿಯ ಶಾಲೆಯಲ್ಲಿ ಆಡಳಿತ, ಶಿಕ್ಷಕರು ಮತ್ತು ವಿದ್ಯಾರ್ಥಿಗಳ ಪಾತ್ರಗಳನ್ನು ಅಸ್ಪಷ್ಟಗೊಳಿಸುವ ಸಮಾನ ರಚನೆ ಇದ್ದಲ್ಲಿ ವೈಯಕ್ತಿಕ ಪ್ರೀತಿ ಆದರಗಳಿಗೆ ದಾರಿಯಾಗುತ್ತದೆ ಹಾಗೂ ವೈಯಕ್ತಿಕ ವ್ಯತ್ಯಾಸಗಳಿಗೆ ಹೆಚ್ಚಿನ ಅವಕಾಶವಿರುತ್ತದೆ. ಎಲ್ಲಿ ಪಾತ್ರಗಳ ನಿರ್ದಿಷ್ಟ ವರ್ಗೀಕರಣಗಳೊಂದಿಗೆ ಏಣಿಶ್ರೇಣಿ ಆಧಾರಿತ ರಚನೆಯಿರುತ್ತದೆಯೋ ಅಲ್ಲಿ ಸಂಬಂಧಗಳು ಹೆಚ್ಚು ಅವೈಯಕ್ತಿಕವಾಗಿದ್ದು, ದೂರದ ಉನ್ನತ ಆದರ್ಶದ ಕಡೆಗೆ ಕೇಂದ್ರೀಕೃತವಾಗಿರುತ್ತವೆ. ಸಮಾಜಶಾಸ್ತ್ರೀಯ ಪರಿಕಲ್ಪನೆಗಳು ವಿದ್ಯಾರ್ಥಿಗಳು, ಶಿಕ್ಷಕರು ಹಾಗೂ ಆಡಳಿತಗಾರರಿಗೆ ವ್ಯತ್ಯಾಸಗಳನ್ನು ತಿಳಿಯಲು ಹಾಗೂ ಪ್ರತಿ ರಚನೆಯ ಒಳಿತು ಮತ್ತು ಕೆಡುಕುಗಳನ್ನು ತೂಗಲು ಸಹಕಾರಿಯಾಗಿವೆ.

**ಕೈಗಾರಿಕೀಕರಣ ಮತ್ತು ಸಂಕೀರ್ಣ ಸಾಮಾಜಗಳು: ಶಿಕ್ಷಣಕ್ಕೆ ಸವಾಲುಗಳು**

ಶಿಕ್ಷಣವು ತಾನಿರುವ ಸಮಾಜದಲ್ಲಿ ಕಂಡುಬರುವ ಸಾಮಾಜಿಕ ರಚನೆಯೊಂದಿಗೆ ಅತ್ಯಂತ ನಿಕಟ ಸಂಬಂಧವನ್ನು ಹೊಂದಿದೆ. ಆರಂಭಿಕ ಸಮಾಜಶಾಸ್ತ್ರಜ್ಞರಲ್ಲಿ ಒಬ್ಬರಾದ ಎಮೀಲ್ ಡರ್ಖೈಮ್ (Emile Durkheim-1857-1977) ಸಮಕಾಲೀನ ಸಂದರ್ಭದಲ್ಲಿ ಕೈಗಾರಿಕೀಕರಣ ಹಾಗೂ ಸಮಾಜದಲ್ಲಿ ಅದರಿಂದ ಉಂಟಾಗುತ್ತಿದ್ದ ಮಾರ್ಪಾಡುಗಳ ಮೇಲೆ ಕೇಂದ್ರೀಕರಿಸಿ ಬದಲಾವಣೆಯ ಹಲವು ಮೂಲ ಬಾಹ್ಯರೇಖೆಗಳನ್ನು ಗುರುತಿಸಿದ್ದಾರೆ. ಅವರು ಸರಳ ಸಾಮಾಜಿಕ ರಚನೆಯನ್ನು ಸಂಕೀರ್ಣ ಸಾಮಾಜಿಕ ರಚನೆಗಳನ್ನು ಎರಡು ಅತಿಗಳಲ್ಲಿ ವರ್ಗೀಕರಿಸಿದರು ಮತ್ತು ಇವುಗಳ ನಡುವೆ ವಿವಿಧ ಛಾಯೆಗಳುಳ್ಳ ರಚನೆಯನ್ನು ಗುರುತಿಸಿದ್ದಾರೆ. ಸಂಕೀರ್ಣ ಸಮಾಜಗಳು ತಮ್ಮದೇ ಆದ

ವಿಶೇಷ ರೀತಿಯ ಪರಿಸ್ಥಿತಿಗಳು ಹಾಗೂ ಸಮಸ್ಯೆಗಳನ್ನು ಹೊಂದಿದ್ದು, ಅದಕ್ಕೆ ಸೂಕ್ತವಾದ ಅತ್ಯುತ್ತಮ ಪರಿಹಾರಗಳು ಯಾವುವೆಂದು ತಿಳಿಯಲು ಹೊಸದಾಗಿ ಆಲೋಚಿಸುವ ಅಗತ್ಯವಿದೆ ಎಂದು ಹೇಳಿದರು. ಸರಳ ಸಾಮಾಜಿಕ ರಚನೆಯಲ್ಲಿ ಸಾಪೇಕ್ಷವಾಗಿ ಕೆಲವೇ ಪಾತ್ರಗಳಿರುತ್ತವೆ ಮತ್ತು ಒಂದು ಸ್ವಯಂ ಸಂಪೂರ್ಣವಾಗಿರುವ ಸಾಮಾಜಿಕ ಘಟಕದ ಪ್ರಮಾಣವೂ ಸಹ ಚಿಕ್ಕದಾಗಿರುತ್ತದೆ. ಬೇಟೆಯಾಡುವ ಮತ್ತು ಆಹಾರ ಸಂಗ್ರಹಣಾ ಸಮಾಜಗಳು ಅಥವಾ ಸಣ್ಣ ಪ್ರಮಾಣದಲ್ಲಿ ಕೃಷಿಯನ್ನು ಅನುಸರಿಸುತ್ತಿರುವ ಹಲವು ಬುಡಕಟ್ಟು ಸಮುದಾಯಗಳಲ್ಲಿ ಸಾಮಾಜಿಕ ಅನುಭವದ ಸಂಪೂರ್ಣತೆಯು ಕಡಿಮೆ ಜನರ ಗುಂಪಿನಲ್ಲಿ ನಿರ್ವಹಿಸಿಕೊಳ್ಳಲಾದ ಕೆಲವೇ ಪಾತ್ರಗಳಿಗೆ ಸೀಮಿತವಾಗಿತ್ತು. ಸಾಮಾನ್ಯವಾಗಿ ಬೇಟೆಯಾಡುವ ಮತ್ತು ಆಹಾರ ಸಂಗ್ರಹಣಾ ಸಮುದಾಯದ ಜನರ ಸಂಖ್ಯೆಯು ನೂರರ ಆಸುಪಾಸಿನಲ್ಲಿದ್ದು ಉತ್ಪಾದಕನಿಂದ ಗ್ರಾಹಕನವರೆಗೆ, ಶಿಕ್ಷಕನಿಂದ ವಿದ್ಯಾರ್ಥಿಯವರೆಗೆ ಎಲ್ಲಾ ಸಾಮಾಜಿಕ ಪಾತ್ರಗಳನ್ನೂ ನಿರ್ವಹಿಸುತ್ತಿದ್ದರು. ಒಂದೇ ವ್ಯಕ್ತಿಯು ಒಂದಕ್ಕಿಂತ ಹೆಚ್ಚು ಪ್ರಮುಖ ಪಾತ್ರಗಳನ್ನು ನಿರ್ವಹಿಸುವುದು ಸರ್ವೇಸಾಮಾನ್ಯವಾಗಿತ್ತು. ಇನ್ನೊಂದೆಡೆ ಪಾತ್ರಗಳ ಸಂಖ್ಯೆಯು ಅತಿ ಹೆಚ್ಚಾಗಿರುವ ಕೈಗಾರಿಕಾ ಸಮಾಜಗಳಿದ್ದು, ಪಾತ್ರಗಳು ಎಷ್ಟು ಅತ್ಯಾಧುನಿಕ ಮತ್ತು ಸಂಕೀರ್ಣವಾಗಿವೆಯೆಂದರೆ ಕೇವಲ ಒಂದು ಪಾತ್ರವನ್ನು ಸಮರ್ಪಕವಾಗಿ ನಿರ್ವಹಿಸುವುದನ್ನು ಕಲಿಯಲು ಹಲವಾರು ವರ್ಷಗಳೇ ಬೇಕಾಗುತ್ತವೆ. ಇದು ಪಾತ್ರಗಳ ಕಿರಿದಾಗುವಿಕೆ ಮತ್ತು ವಿಶಿಷ್ಟೀಕರಣಕ್ಕೆ ಕಾರಣವಾಗಿದೆ. ನಮ್ಮ ಸಾಮಾಜಿಕ ಜೀವನವು ಚಿಕ್ಕ ಪ್ರಮಾಣದಿಂದ ಪರಸ್ಪರ ಸಂಬಂಧ ಹೊಂದಿದ ಹಲವಾರು ಗುಂಪುಗಳು ಹಾಗೂ ಪದರಗಳಿಂದ ಕೂಡಿದ ಬೃಹತ್ ಪ್ರಮಾಣದ್ದಾಗಿದೆ. ಹೆಚ್ಚುತ್ತಿರುವ ಸಂಖ್ಯೆ ಮತ್ತು ಸಂಕೀರ್ಣತೆಯಿಂದಾಗಿ ಸಾಮಾಜಿಕ ಅಸ್ತಿತ್ವದ ಮೂಲ ಸ್ವಭಾವವೇ ಸಂಪೂರ್ಣವಾಗಿ ಬದಲಾವಣೆಗೊಂಡಿದ್ದು, ಶಿಕ್ಷಣದ ಜವಾಬ್ದಾರಿಗಳು ಸಹ ಬದಲಾವಣೆಯಾಗಿವೆ.

ರಸ್ತೆ ದಾಟುವಂತಹ ಒಂದು ಸರಳ ವಿಚಾರವನ್ನು ಪರಿಗಣಿಸೋಣ. ನಾನೀಗ ಕೆಲಸ ಮಾಡುವ ಸ್ಥಳದ ಮುಂದೆ ದೊಡ್ಡ ರಸ್ತೆ ಇದೆ. ಅದು ಧಾರಾಕಾರವಾಗಿ ಹರಿಯುವ ರಭಸ ಪ್ರವಾಹದಂತೆ ಕಾಣುತ್ತದೆ. ಇದು ಲಕ್ಷಾಂತರ ಜನರು ಕೆಲಸ ಮಾಡುವ ಪ್ರಮುಖ ಆರ್ಥಿಕ ಕೇಂದ್ರಕ್ಕೆ ಹೋಗುವ ದಾರಿಯಾಗಿರುವುದರಿಂದ ಸದಾಕಾಲ ಜನಭರಿತವಾಗಿರುತ್ತದೆ. ಸಾವಿರಾರು ವಾಹನಗಳು ಈ ರಸ್ತೆಯ ಮೇಲೆ ಪ್ರತಿದಿನ ಹೋಗಿ ಬರುತ್ತಿರುತ್ತವೆ. ಒಂದು ವೇಳೆ ಈ ರಸ್ತೆಯು ಗ್ರಾಮದ ವಸತಿ ಪ್ರದೇಶಕ್ಕೆ ಹೋಗುವ ದಾರಿಯಾಗಿದ್ದಿದ್ದರೆ, ಸಂಚಾರ ದಟ್ಟಣೆಯು ಈಗಿರುವುದಕ್ಕಿಂತ ಬಹಳ ಕಡಿಮೆ ಇರುತ್ತಿತ್ತು. ಆಗ ಯಾವುದೇ ರೀತಿಯ ಸಂಚಾರ ನಿಯಮಗಳ ಅಗತ್ಯವಿರುತ್ತಿರಲಿಲ್ಲ ಹಾಗೂ ರಸ್ತೆಯ ಬಲಬದಿ ಅಥವಾ ಮಧ್ಯದಲ್ಲಿ ಜನರು ನಡೆದಾಡಿದರೂ ಅದೇನೂ ದೊಡ್ಡ ವಿಷಯವಾಗುತ್ತಿರಲಿಲ್ಲ. ಆದರೆ, ನಾನು ಹೇಳಿದ ಈ ರೀತಿಯ ನಡವಳಿಕೆಗಳು ನನ್ನ ಹೆದ್ದಾರಿಯಲ್ಲಿ ತಕ್ಷಣವೇ ಅಪಘಾತ ಅಥವಾ ಇನ್ನೂ ಕೆಟ್ಟದ್ದಕ್ಕೆ ಕಾರಣವಾಗಬಹುದು. ಇಲ್ಲಿ ಸಂಚಾರ ದಟ್ಟಣೆ (ಟ್ರಾಫಿಕ್ ಜಾಮ್) ಅಥವಾ ಅಪಘಾತಗಳು ಉಂಟಾಗಬಾರದೆಂದು ಎಲ್ಲಿ ವಾಹನ ಚಲಾಯಿಸಬೇಕು, ಎಲ್ಲಿ ನಡೆಯಬೇಕು ಮತ್ತು ಎಲ್ಲಿ ನಿಲ್ಲಬೇಕು ಎಂಬುದಕ್ಕೆ ನಿರ್ದಿಷ್ಟ ನಿಯಮಗಳಿವೆ. ನಿಯಮಗಳನ್ನು ಪಾಲಿಸದೇ ಇರುವವರನ್ನು ಗದರಿಸಲು ಹಾಗೂ ಕೆಲವೊಮ್ಮೆ ದಂಡ ಹಾಕಲು ಸಂಚಾರಿ ಪೋಲಿಸರೆಂದು ಕರೆಯಲಾಗುವ ವಿಶೇಷ

ವ್ಯಕ್ತಿಗಳು ನಿರ್ದಿಷ್ಟ ಸ್ಥಳಗಳಲ್ಲಿ ನಿಲ್ಲುತ್ತಾರೆ. ಕವಲುದಾರಿಗಳಲ್ಲಿರುವ ಜನರನ್ನು ನಾನು ನಿಂತು ಗಮನಿಸಿದಾಗ, ಈ ಸಂಕೀರ್ಣ ಹಾಗೂ ಹೊಸದೆನಿಸುವ ಜಗತ್ತಿಗೆ ಯಾರು ಇತ್ತೀಚೆಗೆ ಬಂದಿರುವವರು ಹಾಗೂ ಯಾರು ಪರಿಣಿತರು ಎಂದು ಗುರುತಿಸಬಹುದು. ಹೊಸದಾಗಿ ಬಂದಿರುವವರು ಎಲ್ಲಿ ಹೋಗಬೇಕು ಮತ್ತು ಎಲ್ಲಿ ನಿಲ್ಲಬೇಕು ಎಂದು ತಿಳಿಯದೇ ದಿಗ್ಭ್ರಮೆಗೊಂಡಿರುತ್ತಾರೆ. ಅವರು ಬಹಳ ಉದ್ವೇಗಗೊಂಡಿರುವಂತೆ ಹಾಗೂ ಒತ್ತಡಕ್ಕೆ ಒಳಗಾದಂತೆ ಕಾಣುತ್ತಾರೆ ಹಾಗೂ ಈ ದೊಡ್ಡ ನಗರವು ಎಷ್ಟು ಭೀಕರವಾಗಿದೆ ಎಂಬುದರ ಬಗ್ಗೆ ಮಾತಾಡುತ್ತಾರೆ. ಆದರೆ ಹಲವು ಸಮಯದಿಂದ ಇಲ್ಲಿ ವಾಸವಾಗಿರುವ ವ್ಯಕ್ತಿಯು ಎಲ್ಲಿ ನಿಧಾನಿಸಬೇಕು ಹಾಗೂ ಎಲ್ಲಿ ವೇಗವಾಗಿ ಹೋಗಬೇಕು ಎಂಬುದನ್ನು ತಿಳಿದಿರುತ್ತಾನೆ. ಸಣ್ಣ ಗ್ರಾಮೀಣ ವಾತಾವರಣದಲ್ಲಿದ್ದು ಕಲಿತಂತಹ ಅಭ್ಯಾಸಗಳ ಅನುಭವದಿಂದ, ಅವನು ಎಲ್ಲೆಲ್ಲಿ ಜಾಗಾವಕಾಶಗಳು ಸಿಗುತ್ತವೆಯೋ ಅಲ್ಲಿ ಮುಂದೆ ನುಗ್ಗುವುದರಿಂದ ಕೆಲವೊಮ್ಮೆ ಸಂಚಾರ ದಟ್ಟಣೆಯನ್ನುಂಟುಮಾಡಬಹುದು ಅಥವಾ ಅಸ್ತವ್ಯಸ್ತಗೊಳಿಸಲೂಬಹುದು. ಅವನೂ ಸಹ ಉದ್ವಿಗ್ನಗೊಂಡವನಾಗಿ, ತಾಳ್ಮೆಯನ್ನು ಪರೀಕ್ಷಿಸುವ ಆ ಅನುಭವವನ್ನು ಆದಷ್ಟು ಬೇಗನೆ ಕೊನೆಗಾಣಲು ಬಯಸುತ್ತಾನೆ. ಆದರೆ ಹೆಚ್ಚು ಅನುಭವಸ್ಥರು ಅವಳಂತೆ ಯಾವ ಒತ್ತಡವಿಲ್ಲದೆ ಜನ ಸಂದಣಿಯ ನಡುವೆ ಸಾರಾಗವಾಗಿ ಗಾಡಿಯನ್ನು ಚಾಲನೆ ಮಾಡುವುದು ಕಾಣಬಹುದು. ಆಕೆಯು ಸಂಚಾರವನ್ನು ನಿಧಾನಗತಿಯಲ್ಲಿ ಅನುಸರಿಸುವುದು ಹೆಚ್ಚು ಅನುಕೂಲಕರ ಹಾಗೂ ಕೆಂಪುದೀಪ ಬಂದಾಗ ಕೋಪೋದ್ರೇಕಗೊಳ್ಳುತ್ತಾ ರೇಗಾಡುತ್ತ ಅಡ್ಡಾದಿಡ್ಡಿ ನುಗ್ಗಿ ಮುಂದೆ ಸಾಗಲು ಪ್ರಯತ್ನಿಸದೇ ಇಂಜಿನನ್ನು ಆಫ್ ಮಾಡಿ ನಿಲ್ಲಿಸಿ ಅಂದು ತಾನು ಮಾಡಬೇಕಾದ ಆಸಕ್ತಿಯುಳ್ಳ ಕೆಲಸಗಳ ಬಗ್ಗೆ ಆಲೋಚಿಸುವುದು ಹೆಚ್ಚು ಸೂಕ್ತ ಎಂದು ಕಂಡುಕೊಂಡಿದ್ದಾಳೆ. ಸಂಕೀರ್ಣ ಸಮಾಜದೊಂದಿಗೆ ವ್ಯವಹರಿಸುವ ವಿಧಾನಗಳು ಸರಳ ಸಮಾಜಕ್ಕೆ ಬೇಕಾಗುವ ವಿಧಾನಗಳಿಗಿಂತ ಬಹುತೇಕ ಭಿನ್ನವಾಗಿರುತ್ತವೆ. ಹೊಸ ಸನ್ನಿವೇಶದಲ್ಲಿ ಸುಮ್ಮನೆ ಹಳೆಯ ಮಾದರಿಗಳನ್ನು ಅನುಸರಿಸುವುದು ಎಲ್ಲಾ ಸಮಯದಲ್ಲಿ ಕಾರ್ಯಸಾಧುವಲ್ಲ. ರಸ್ತೆ ದಾಟುವಂತಹ ಸಾಧಾರಣ ವಿಷಯಗಳ ಬಗ್ಗೆಯೂ ಹೊಸದಾಗಿ ಆಲೋಚಿಸುವುದು ಅಗತ್ಯವಾಗುತ್ತದೆ. ಶಿಕ್ಷಣದಿಂದ ನಾವು ನಿರೀಕ್ಷಿಸುವ ವಿಚಾರಗಳಲ್ಲಿ ಒಂದೇನೆಂದರೆ, ಅದು ಯುವ ಪೀಳಿಗೆಗೆ ಸಂಕೀರ್ಣ ಸಮಾಜದ ರೀತಿ ನೀತಿಯ ಬಗ್ಗೆ ಕಲಿಸಬೇಕು ಎಂಬುದು ಮತ್ತು ಅಂತಹ ಸಾಮಾಜಿಕ ರಚನೆಗೆ ಸೂಕ್ತವಾದ ಸಂಸ್ಕೃತಿಯೊಂದನ್ನು ನಾವು ಅವರಿಗೆ ಕಲಿಸಬೇಕೆಂದು ಬಯಸುತ್ತೇವೆ.

**ನಿರ್ದಿಷ್ಟ (Particularistic) ಸಂಸ್ಕೃತಿಗಳಿಂದ ಸಾರ್ವತ್ರಿಕ (Universalistic) ಸಂಸ್ಕೃತಿಯೆಡೆಗೆ ಬದಲಾವಣೆ**

ಸಂಸ್ಕೃತಿಯು ನಮ್ಮ ಸಾಮಾಜಿಕ ಜೀವನದ ಪ್ರಮುಖ ಮತ್ತು ಅತ್ಯಗತ್ಯ ಭಾಗವಾಗಿದೆ. ನಾವು ಅದನ್ನು ಕಲಿಕೆಯಿಂದ ಪಾರಂಪರಗತವಾಗಿ ಪಡೆಯುವುದರೊಂದಿಗೆ ನಾವೇ ಸೃಷ್ಟಿಸಿ ಮಾರ್ಪಾಡು ಸಹ ಮಾಡುತ್ತೇವೆ. ಸಂಸ್ಕೃತಿ ಎಂದರೆ ಸಾಮಾನ್ಯವಾಗಿ ನಾವು ಪ್ರತಿನಿತ್ಯ ಆಲೋಚಿಸುವ, ಮಾಡುವ ಮತ್ತು ಅನುಭವಿಸುವ ಚಿಂತನೆಗಳು, ನಂಬಿಕೆಗಳು, ಮೌಲ್ಯಗಳು, ಧೋರಣೆಗಳು ಮತ್ತು ಆಚರಣೆಗಳಾಗಿವೆ. ಸಂಸ್ಕೃತಿಯು ಪರಸ್ಪರರಿಗೆ ಅರ್ಥವಾಗುವ ರೀತಿಯಲ್ಲಿ

ವ್ಯವಹರಿಸಲು ಹಾಗೂ ರಸ್ತೆಯಲ್ಲಿನ ಸಂಚಾರ ದಟ್ಟಣೆಯನ್ನು ನಿಭಾಯಿಸುವುದನ್ನು ಮತ್ತು ನಮ್ಮ ದೈನಂದಿನ ಜೀವನವನ್ನು ರೂಪಿಸುವುದು ಸೇರಿದಂತೆ ಇನ್ನೂ ಹಲವಾರು ಸಂಗತಿಗಳನ್ನೂ ಒಳಗೊಂಡದ್ದಾಗಿರುತ್ತದೆ. ಅಲ್ಲದೆ, ನಮ್ಮ ಕಾಲಘಟ್ಟದ ಬಹುದೊಡ್ಡ ಪ್ರಶ್ನೆಗಳಾದ ಸಾಮಾಜಿಕ ದಬ್ಬಾಳಿಕೆಯನ್ನು ಅರ್ಥೈಸುವ ಹಾಗೂ ಅದಕ್ಕೆ ಪ್ರತಿಕ್ರಿಯಿಸುವ ಅಥವಾ ಪರಿಚಿತವಲ್ಲದ ಗಮನಾರ್ಹವಾಗಿ ಭಿನ್ನವಾದ ಸಂಸ್ಕೃತಿಗಳೊಂದಿಗೆ ಹೇಗೆ ವ್ಯವಹರಿಸುವುದು ಎಂಬುದರ ಬಗ್ಗೆ ಸಲಹೆಯನ್ನೂ ನೀಡುತ್ತದೆ. ಪ್ರಪಂಚದಾದ್ಯಂತ ಸಂಸ್ಕೃತಿಗಳು ಹಲವಾರು ಸಮಾನ ಅಂಶಗಳನ್ನು ಹಂಚಿಕೊಳ್ಳುವುದರ ಜೊತೆಗೆ ಗುರುತರ ವ್ಯತ್ಯಾಸಗಳನ್ನೂ ಹೊಂದಿರಬಹುದಾಗಿದೆ. ಸಾಮಾನ್ಯವಾಗಿ ಒಂದು ಸಂಸ್ಕೃತಿ ಎಲ್ಲಿಗೆ ಕೊನೆಗೊಳ್ಳುತ್ತದೆ ಹಾಗೂ ಇನ್ನೊಂದು ಸಂಸ್ಕೃತಿ ಎಲ್ಲಿಂದ ಪ್ರಾರಂಭವಾಗುತ್ತದೆ ಎಂದು ಗಡಿಯನ್ನು ಹಾಕುವುದು ಕಷ್ಟಸಾಧ್ಯ. ಉದಾಹರಣೆಗೆ, ಮಹಾರಾಷ್ಟ್ರ ಮತ್ತು ಕರ್ನಾಟಕದ ಮಧ್ಯೆ ರಾಜಕೀಯ ಗಡಿಯನ್ನು ಗುರುತಿಸುವುದು ಸಾಧ್ಯವಾಗಬಹುದು ಆದರೆ ಸಾಂಸ್ಕೃತಿಕ ಗಡಿ ಎಲ್ಲಿ ಕೊನೆಗೊಳ್ಳುತ್ತದೆ ಮತ್ತು ಪ್ರಾರಂಭವಾಗುತ್ತದೆ ಎಂಬುದನ್ನು ಗುರುತಿಸುವುದು ನಿಜವಾಗಿಯೂ ಅಸಾಧ್ಯ. ಹಾಗೆಯೇ, ಪಾಕಿಸ್ತಾನ ಅಥವಾ ಶ್ರೀಲಂಕಾದ ಸಾಂಸ್ಕೃತಿಕ ಗಡಿ ಕೊನೆಗೊಳ್ಳುವ ರೇಖೆ ಮತ್ತು ಭಾರತದ ಸಂಸ್ಕೃತಿಯು ಪ್ರಾರಂಭವಾಗುವ ರೇಖೆಯನ್ನು ಗುರುತಿಸುವುದು ಅಸಾಧ್ಯವೆಂದೇ ಹೇಳಬಹುದು. ಒಂದರ ಮೇಲೊಂದು ಪ್ರಭಾವ ಬೀರುವ ಹಲವಾರು ಸಾಂಸ್ಕೃತಿಕ ನಂಬಿಕೆಗಳು, ಚಿಂತನೆಗಳು, ಆಚರಣೆಗಳು, ಭಾಷೆಗಳು, ನುಡಿಗಟ್ಟುಗಳು ಮುಂತಾದವು ಪರಸ್ಪರ ಹಂಚಿಕೊಳ್ಳಲ್ಪಟ್ಟಿರುತ್ತವೆ.

ಆಳವಾಗಿ ಗಮನಿಸಿದಾಗ ಸರಳತೆಯಿಂದ ಸಂಕೀರ್ಣ ಸಮಾಜಗಳ ಸಾಮಾಜಿಕ ರಚನೆಯಲ್ಲಿನ ಬದಲಾವಣೆಯೊಂದಿಗೆ ಸಂಸ್ಕೃತಿಗಳಲ್ಲಿಯೂ ನಿಧಾನಗತಿಯ ಬದಲಾವಣೆಯನ್ನು ಕಾಣಬಹುದಾಗಿದೆ. ಸರಳ ಸಮಾಜಗಳಲ್ಲಿ ವೈಯಕ್ತಿಕ ಕುಟುಂಬ ಆಧಾರಿತ ಸಂಬಂಧಗಳಿಗೆ ಹೆಚ್ಚಿನ ಮೌಲ್ಯವಿದ್ದು ಸಮಾಜಗಳು ಸಂಕೀರ್ಣವಾದಂತೆಲ್ಲಾ ಕೌಟುಂಬಿಕೇತರ ಸಂದರ್ಭಗಳಲ್ಲಿನ ಸಂಬಂಧಗಳು ಹೆಚ್ಚು ಪ್ರಮುಖವಾಗುತ್ತಾ ಹೋಗುತ್ತವೆ. ಇಲ್ಲಿ ಸಂಸ್ಕೃತಿಯಲ್ಲಿಯೂ ಸಹ ಹಲವು ಬದಲಾವಣೆಗಳು ಉಂಟಾಗಬಹುದು. ಉದಾಹರಣೆಗೆ, ನಾನು ಯಾರು ಎಂಬ ಗ್ರಹಿಕೆಯು ನನ್ನ ಕುಟುಂಬ ಮತ್ತು ಅದರ ಅನನ್ಯ ಇತಿಹಾಸದಿಂದಲ್ಲದೆ ನಾನು ಯಾವ ಶಾಲೆಯಲ್ಲಿ ಓದಿದ್ದೇನೆ ಹಾಗೂ ಕಾರ್ಖಾನೆ ಅಥವಾ ಕಛೇರಿ ಅಥವಾ ಕೃಷಿಕ್ಷೇತ್ರದಲ್ಲಿ ನಾನು ಏನು ಕೆಲಸ ಮಾಡುತ್ತೇನೆ ಎಂಬುದರಿಂದ ಹೆಚ್ಚು ಉಂಟಾಗಬಹುದು. ಸಾಮಾನ್ಯವಾಗಿ ಇದನ್ನು ನಿರ್ದಿಷ್ಟ ಸಂಸ್ಕೃತಿಯಿಂದ ಸಾರ್ವತ್ರಿಕ ಸಂಸ್ಕೃತಿಯೆಡೆಗಿನ ಬದಲಾವಣೆ ಎಂದು ಕರೆಯುತ್ತಾರೆ. ನಿರ್ದಿಷ್ಟತೆಯ ಮೇಲೆ ಹೆಚ್ಚು ಆಧಾರಿತವಾಗಿರುವ ಸಂಸ್ಕೃತಿಗಳಲ್ಲಿ, ಅತ್ಯಂತ ಮುಖ್ಯವಾದ ಪಾತ್ರಗಳು ಸಣ್ಣ ಪ್ರಮಾಣದ ಸಾಮಾಜಿಕ ವ್ಯವಸ್ಥೆಗಳಲ್ಲಿ 'ನಿರ್ದಿಷ್ಟ' ಪರಿಚಿತ ಜನರೊಂದಿಗೆ ವ್ಯವಹರಿಸುತ್ತವೆ. ಇಂತಹ ಸಮಾಜಗಳಲ್ಲಿ ಉದಾಹರಣೆಗೆ, ನಾನು ನನ್ನ ಸ್ವಂತ ಅಣ್ಣ-ತಮ್ಮ ಮತ್ತು ಅಕ್ಕ-ತಂಗಿಯರ ಮಕ್ಕಳಿಗಷ್ಟೇ ಅಲ್ಲದೆ ನನ್ನ ಸೋದರ ಸಂಬಂಧಿಗಳ ಮಕ್ಕಳಿಗೂ ನಾನು ಮಾಮ (uncle– ಅಂಕಲ್) ಆಗಿರುವುದರಿಂದ ಈ ಎಲ್ಲಾ ಮಕ್ಕಳಿಗೂ ಶಿಕ್ಷಣ ನೀಡುವುದು ನನ್ನ ಕರ್ತವ್ಯವಾಗಬಹುದು. ಇತರರು ಯಾರಾದರೂ ನನ್ನಿಂದ ಕಲಿಯಲು ಬಯಸಿದಾಗ ನಾನು ಅವರಿಗೆ ಕಲಿಸಬಹುದಾದರೂ, ನನ್ನ ಸುತ್ತಲೂ ಇರುವ ಮತ್ತು ನನಗೆ ತುಂಬಾ ಮುಖ್ಯವಾದವರು ನನ್ನ ಸಂಬಂಧಿಕರ ಕಡೆಗೇ

ಹೆಚ್ಚು ಗಮನಹರಿಸಬೇಕೆಂದು ಅಪೇಕ್ಷೆಪಡುತ್ತಾರೆ. ಆದರೆ, ಹೆಚ್ಚು ಸಾರ್ವತ್ರಿಕವಾದ ಸಮಾಜದಲ್ಲಿ ನಾನು ಶಿಕ್ಷಕನಾಗಿ ಉದ್ಯೋಗವನ್ನು ಪಡೆದರೆ, ನಾನಿರುವ ಶಾಲೆಯು ಕಲಿಕೆಯಲ್ಲಿ ಆಸಕ್ತಿಯಿರುವ ಯಾರಿಗಾದರೂ ನಾನು ಕಲಿಸಬೇಕೆಂದು ನಿರೀಕ್ಷಿಸುತ್ತದೆ. ನಾನು ಕೇವಲ ನನ್ನ ಸಂಬಂಧಿಕರ ಕಡೆಗೆ ಮಾತ್ರ ಗಮನ ಕೇಂದ್ರೀಕರಿಸಬಾರದು ಎಂಬುದರ ಮೇಲೆ ಹೆಚ್ಚು ಒತ್ತು ನೀಡಲಾಗುತ್ತದೆ. ಹಾಗೂ, ಇದಕ್ಕೆ ಬದಲಾಗಿ ನಾನು ನನ್ನ ಸಂಬಂಧಿ ಮತ್ತು ನನಗೆ ಸಂಪೂರ್ಣ ಪರಿಚಯವೇ ಇಲ್ಲದಿರುವವರ ನಡುವೆ ಯಾವುದೇ ರೀತಿಯ ತಾರತಮ್ಯತೆ ಮಾಡಬಾರದೆಂಬುದು ಬಹಳ ಮುಖ್ಯವಾಗಿರುತ್ತದೆ. ಸ್ವಜನಪಕ್ಷಪಾತವು ಒಂದು ಕೆಟ್ಟ ಪದವಾಗುತ್ತದೆ.

ಸಂಕೀರ್ಣ ರಚನೆಗಳು ಇನ್ನೂ ಹೆಚ್ಚು ಹೆಚ್ಚು ಜನರೊಡನೆ ಸಂಬಂಧ ಬೆಳಸಬೇಕಾದ ಅಗತ್ಯವಿರುವುದರಿಂದ ಕ್ರಮೇಣ ಹೆಚ್ಚು ಸಾರ್ವತ್ರಿಕ ಸಮಾಜಗಳೆಡೆಗೆ ಚಲಿಸುವುದು ಅದರ ವೈಶಿಷ್ಟ್ಯತೆಯಾಗಿದೆ. ಇದು ನಿರ್ದಿಷ್ಟವಾಗಿ ಹೇಗೆ ಉಂಟಾಗುತ್ತದೆ ಎಂಬುದು ವಿವಿಧ ಪ್ರದೇಶಗಳಲ್ಲಿ ವಿವಿಧ ಮಾದರಿಗಳಲ್ಲಿದ್ದು ಎಲ್ಲರ ನಡುವೆ ಸಮಾನತೆ ಹಾಗೂ ಕೇವಲ ನನ್ನ ಸಮುದಾಯ ಅಥವಾ ನನ್ನ ಸಂಬಂಧಿಕರಿಗಷ್ಟೇ ಅಲ್ಲದೇ ಎಲ್ಲರಿಗೂ ನ್ಯಾಯ ಒದಗಿಸುವ ಉದ್ದೇಶವನ್ನೊಳಗೊಂಡ ಸಾಂಸ್ಕೃತಿಕ ಬದಲಾವಣೆಯು ಅಲ್ಲಿ ಕಂಡುಬರುತ್ತದೆ. ಈ ಸಾರ್ವತ್ರಿಕ ತತ್ವಗಳು ಕೆಲವು ಪ್ರದೇಶಗಳಲ್ಲಿ ಹೆಚ್ಚು ಮುಂದುವರೆದಿರಬಹುದು ಅಥವಾ ಇನ್ನೂ ಕೆಲವೆಡೆ ಕಡಿಮೆ ಮುಂದುವರೆದಿರಬಹುದು, ಹಾಗೂ ಸಣ್ಣ ಪ್ರಮಾಣದ ಸಮಾಜಗಳ ಸಂಸ್ಕೃತಿಯನ್ನು ಇನ್ನೂ ಹೊಂದಿರುವ ಮತ್ತು ಅಂತಹ ಸಾಮಾಜಿಕ ರಚನೆಗಳಿಂದ ಆಸ್ತಿ ಮತ್ತು ಅಧಿಕಾರವನ್ನು ಪಡೆಯುವವರಿಂದ ಪ್ರತಿರೋಧವನ್ನು ಎದುರಿಸುತ್ತಿರಬಹುದು. ಹೋಲಿಕೆ ಇಲ್ಲದ ಸಣ್ಣ ಸಮುದಾಯಗಳ ನಡುವಿನ ಅಸಮಾನತೆಗೆ ಬದಲಾಗಿ ಸಂಕೀರ್ಣ ಸಮಾಜಗಳಲ್ಲಿ ವರ್ಗ ಅಸಮಾನತೆಯು ಒಂದು ಪ್ರಮುಖ ಗಣನೀಯ ಅಂಶವಾಗಿ ಸಾಮಾಜಿಕ ಅಸಮಾನತೆ ಮತ್ತು ಅನ್ಯಾಯಗಳು ಹೊಸ ರೂಪಗಳನ್ನು ಪಡೆಯಬಹುದು. ಆದಾಗ್ಯೂ, ಈ ಬದಲಾವಣೆ ಅನಿವಾರ್ಯವೆಂದೇನಲ್ಲ ಏಕೆಂದರೆ ಇತಿಹಾಸದಲ್ಲಿ ನಾವು ನೋಡಿದಂತೆ ಸಿಂಧೂ ನದಿ ನಾಗರೀಕತೆಯಂತಹ ಸಂಕೀರ್ಣ ಸಮಾಜಗಳು ಸಹ ಅವನತಿ ಹೊಂದಿ ಸಣ್ಣ ಪ್ರಮಾಣದ ಸರಳ ಗ್ರಾಮೀಣ ಜೀವನಕ್ಕೆ ಹಿಂದಿರುಗಿದ್ದವು. ಅಲ್ಲದೇ ಜಾತೀಯತೆ ಮತ್ತು ಜನಾಂಗೀಯತೆಯು ಹಿಂದಿಗಿಂತಲೂ ಕಡಿಮೆ ಪ್ರಮಾಣದಲ್ಲಿ ಗೋಚರವಾಗುವ ರೀತಿಯಲ್ಲಿ ಮುಂದುವರೆಯಬಹುದು.

ಎಮೀಲ್ ಡರ್ಖೈಮ್‌ರವರು ತಮ್ಮ 'ದಿ ಡಿವಿಜನ್ ಆಫ್ ಲೇಬರ್ ಇನ್ ಸೊಸೈಟಿ'(*The Division of Labor in Society*-1893) ಕೃತಿಯಲ್ಲಿ, ಸಂಕೀರ್ಣ ಸಮಾಜಗಳಲ್ಲಿ ಸಂಸ್ಕೃತಿಗಳ ಬದಲಾವಣೆಯು ಅಷ್ಟು ಸುಲಭವಾಗಿ ಸಂಭವಿಸುವುದಿಲ್ಲ ಎನ್ನುವತ್ತ ಗಮನ ಸೆಳೆದರು. ರಕ್ತಸಂಬಂಧ ಆಧಾರಿತ ಸಂಬಂಧಗಳು ಮಹತ್ವ ಕಳೆದುಕೊಂಡರೂ (ಯಾವತ್ತೂ ಕಣ್ಮರೆಯಾಗುವುದಿಲ್ಲ) ಹೊಸ ಗುಂಪುಗಳು ರೂಪುಗೊಳ್ಳುತ್ತವೆ ಮತ್ತು ಹುಟ್ಟುತ್ತವೆ. ಮುಂದುವರೆದು, ಈ ಸಮಾಜಗಳು ಹತಾಶೆ ಮತ್ತು ಕ್ರೋಧವನ್ನು ಬೆಳೆಸುವ ವಿವಿಧ ರೀತಿಯ ಪ್ರಾಬಲ್ಯತೆಗಳನ್ನು ಇನ್ನೂ ಹೊಂದಿರಬಹುದು. ಯಾವುದೇ ಒಂದು ಗುಂಪು ತಮ್ಮನ್ನು ತಾವು ಮಾತ್ರ ಒಳ್ಳೆಯ ಜನರು ಮತ್ತು ಇತರರೆಲ್ಲರೂ ಕೀಳು ಮಟ್ಟದವರು ಹಾಗೂ ಅನಾಗರೀಕರು ಅಥವಾ ಒಂದಲ್ಲಾ ಒಂದು ರೀತಿಯಲ್ಲಿ ತಿರಸ್ಕರಿಸಲು ಮತ್ತು ನಿರಾಕರಿಸಲು ಅರ್ಹರು ಎಂದು

ಭಾವಿಸಬಹುದು ಅಥವಾ ಅವರನ್ನು ತುಳಿಯಲು ಪ್ರಯತ್ನಿಸಬಹುದು. ಸಂಕೀರ್ಣ ಸಮಾಜಗಳ ಉಳಿವಿಗೆ ಹಲವಾರು ಅಂಶಗಳು ಅಗತ್ಯವಿದ್ದು, ಅದರಲ್ಲಿ ಪ್ರಮುಖವಾದುದು ಬಾಂಧವ್ಯದ ಭಾವನೆ ಅಥವಾ ಅವರೆಲ್ಲರನ್ನೂ ಒಟ್ಟಾಗಿ ಹಿಡಿದಿಡುವ ಐಕ್ಯತೆ. ಸರಳ ಸಣ್ಣ ಪ್ರಮಾಣದ ಸಮಾಜಗಳಲ್ಲಿಯೂ ಸಹ ಈ ಐಕ್ಯತೆಯ ಅಗತ್ಯತೆಯಿದ್ದು ಅದು ದಿನನಿತ್ಯದ ಅಂತಕ್ರಿಯೆಗಳು ಹಾಗೂ ಹಬ್ಬ ಹರಿದಿನಗಳಿಂದ ಐಕ್ಯತೆ ಉಂಟಾಗುತ್ತದೆ. ಈ ರೀತಿಯ ಸರಳ ಐಕ್ಯತೆಯನ್ನು ಎಮೀಲ್ ಡರ್ಖೈಮ್ ಅವರು 'ಯಾಂತ್ರಿಕ ಐಕ್ಯತೆ'ಎಂದು ಕರೆದಿದ್ದು, ಇದು ನೇರ ಮುಖಾಮುಖಿ ಅಂತರ್ ಕ್ರಿಯೆಗಳಿಂದ ಉಂಟಾಗುವ ಭಾವನಾತ್ಮಕ ಮತ್ತು ಭ್ರಾತೃತ್ವದ ಭಾವನೆಗಳ ಮೇಲೆ ಆಧಾರವಾಗಿದೆ.

ಸಂಕೀರ್ಣ ಸಮಾಜದಲ್ಲಿ ಈ ಐಕ್ಯತೆಯನ್ನುಂಟುಮಾಡುವುದು ಬಹು ಕ್ಲಿಷ್ಟಕರ ಸಂಗತಿಯಾಗಿದೆ. ಸಾಮಾನ್ಯವಾಗಿ ಇಲ್ಲಿ ವಿವಿಧ ರೀತಿಯ ಜನರು ಪ್ರತಿದಿನವೂ ಪರಸ್ಪರ ಸಂಭಾಷಣೆ ನಡೆಸುವುದಿಲ್ಲ. ಸಮಕಾಲೀನ ಸಂಕೀರ್ಣ ಸಮಾಜಗಳು ಕಾರ್ಖಾನೆ ಕೆಲಸಗಾರರು, ವೈದ್ಯರು, ಶಿಕ್ಷಕರು ಮುಂತಾದ ವಿವಿಧ ವಿಶಿಷ್ಟ ಗುಂಪುಗಳನ್ನು ಹೊಂದಿದ್ದು ಅವರು ಇತರರಿಗಿಂತ ಹೆಚ್ಚಾಗಿ ತಮ್ಮೊಳಗೆ ಪರಸ್ಪರ ಸಂಬಂಧವನ್ನು ಹೊಂದಿರುತ್ತಾರೆ. ಹಲವು ರೀತಿಯ ಭಾಷೆಗಳು, ಧರ್ಮಗಳು ಮತ್ತು ಸಮುದಾಯಗಳಿಂದ ಕೂಡಿರುವ ಭಾರತದಂತಹ ದೇಶಗಳಲ್ಲಿ ಐಕ್ಯತೆಯನ್ನು ಸಾಧಿಸಲು ಇರುವ ಕಷ್ಟಗಳು ಅಗಾಧವಾಗಿವೆ. ತಮಿಳರು ತಮ್ಮನ್ನು ತಾವು ಗುಜರಾತಿ ಮತ್ತು ಕನ್ನಡಿಗರಿಗಿಂತ ಭಿನ್ನವೆಂದು ನಂಬಬಹುದು; ಮಿಜೋರಾಂನ ಜನ ದೆಹಲಿಗೆ ಬಂದಾಗ ಪ್ರತಿಕೂಲದ ಪ್ರತಿಕ್ರಿಯೆಯನ್ನು ಪಡೆಯಬಹುದು. ಈ ಎಲ್ಲಾ ವಿವಿಧ ಭಾಗಗಳ ನಡುವೆ ಹೇಗೆ ಬಂಧುತ್ವದ ಭಾವನೆಗಳನ್ನುಂಟುಮಾಡುವುದು ಎಂಬುದು ಇಂತಹ ಸಮಾಜಗಳಿಗೆ ಸದಾ ಸಮಸ್ಯೆಯಾಗಿರುತ್ತದೆ.

ಪರಸ್ಪರ ಸಂಬಂಧದ ಭಾವನೆಯನ್ನು ಉಳಿಸಿ ಬೆಳೆಸಲು ಮಾರುಕಟ್ಟೆಯ ಮುಖಾಂತರ ವಸ್ತು ವಿನಿಮಯ ಮಾಡಿಕೊಳ್ಳುವುದು ಹಾಗೂ ಪರಸ್ಪರ ಅಗತ್ಯಗಳಿಗಾಗಿ ಸಂಬಂಧಗಳನ್ನು ರೂಪಿಸಿಕೊಳ್ಳುವುದು ಒಂದು ವಿಧ. ಎಮೀಲ್ ಡರ್ಖೈಮ್ ಅವರು ಮಾರುಕಟ್ಟೆ ಆಧಾರಿತ ಐಕ್ಯತೆಯನ್ನು 'ಒಪ್ಪಂದದ ಐಕ್ಯತೆ' ಎಂದು ಕರೆದಿದ್ದು ಆದರೆ, ಇದು ದೃಢವಾದ ಸುಸ್ಥಿರ ಬಾಂಧವ್ಯಕ್ಕೆ ದಾರಿಯಾಗುವುದಿಲ್ಲ ಎಂದಿದ್ದಾರೆ. ಪ್ರಸ್ತುತ ವ್ಯವಹಾರವನ್ನು ಉತ್ತಮಪಡಿಸಲು ಇರುವ ಒಪ್ಪಂದಗಳನ್ನು ಮುರಿದು ಹೊಸ ಒಪ್ಪಂದಗಳನ್ನು ಮಾಡಬಹುದಾದುದರಿಂದ ಮಾರುಕಟ್ಟೆಯು ಕೇವಲ ದುರ್ಬಲ ಸಂಬಂಧಗಳಿಗೆ ದಾರಿಯಾಗುತ್ತದೆ. ಸಂಬಂಧಗಳು ಇಷ್ಟೊಂದು ಅಭದ್ರ ಮತ್ತು ತಾತ್ಕಾಲಿಕವಾದರೆ ಯಾವುದೇ ಸಮಾಜವು ಉಳಿಯುವುದಿಲ್ಲ. ಇದಕ್ಕೆ ಬದಲಾಗಿ, ಸಂಕೀರ್ಣ ಸಮಾಜಗಳು ಒಗ್ಗೂಡಿ ಇರಬೇಕಾದರೆ ವಿವಿಧ ರೀತಿಯ ಸಾಮಾಜಿಕ ಗುಂಪುಗಳು ಹಾಗೂ ವರ್ಗಗಳಿಗೆ ತಲುಪಬಹುದಾದ ಸಂಸ್ಕೃತಿಯನ್ನು ಆಧರಿಸಿದ 'ಜೈವಿಕ ಐಕ್ಯತೆ'ಯ ಅಗತ್ಯತೆ ಇದೆ ಎಂದು ಹೇಳಿದ್ದಾರೆ. ಇಲ್ಲಿ "ಜೈವಿಕ" ಪದವನ್ನು ಎಮೀಲ್ ಡರ್ಖೈಮ್‌ರವರು ಗಿಡಗಳು ಮತ್ತು ಪ್ರಾಣಿಗಳಲ್ಲಿ ವಿವಿಧ ಅಂಗಾಂಗಗಳು ಪರಸ್ಪರ ಸಂಬಂಧ ಹೊಂದಿರುವಂತೆ ಸಮಾಜಗಳಲ್ಲಿಯೂ ಗುಂಪುಗಳು ಮತ್ತು ಸಮುದಾಯಗಳ ನಡುವೆ ಪರಸ್ಪರ ಸಂಬಂಧವಿದೆ ಎಂಬುದನ್ನು ತಿಳಿಸಲು ಈ ಸಾಮ್ಯತೆಯನ್ನು ಬಳಸಿದರು. ಗಿಡದ ಉಳಿವು ಮತ್ತು ಬೆಳೆವಣಿಗೆಗೆ ಎಲ್ಲಾ ಭಾಗಗಳ ಯೋಗಕ್ಷೇಮ ಮತ್ತು ಅವುಗಳ ನಡುವೆ ಸಮರ್ಪಕ

ಸಂಬಂಧ ಹಾಗೂ ಪೂರಕ ಕಾರ್ಯದ ಅಗತ್ಯವಿದೆ. ಈ ಗಿಡದೊಂದಿಗಿನ ಸಾಮ್ಯತೆಯನ್ನು ಹೆಚ್ಚು ದೂರ ಕೊಂಡೊಯ್ಯದೆ, ಸಮಾಜದ ಎಲ್ಲಾ ವಿವಿಧ ಗುಂಪುಗಳಲ್ಲಿ ತಮಗೆ ಅಗತ್ಯವಾದ ಅನನ್ಯತೆಯೊಂದಿಗೆ ನ್ಯಾಯವೂ ದೊರಕುತ್ತದೆ ಎಂಬುದರ ಜೊತೆಗೆ ಪರಸ್ಪರ ಸಂಬಂಧದಿಂದ ಉಂಟಾಗುವ ಸಂತೋಷ ಮತ್ತು ಲಾಭಗಳ ಬಗ್ಗೆಯೂ ಭಾವನೆಯುಂಟಾಗುವುದು ಅಗತ್ಯವಿದೆ. ಈ ಹಿನ್ನೆಲೆಯಲ್ಲಿ ಜೈವಿಕ ಐಕ್ಯತೆ ಎಂಬುದು ಪರಸ್ಪರರೊಂದಿಗೆ ಭಾವನಾತ್ಮಕವಾಗಿ ಬಾಂಧವ್ಯ ಮೂಡಿಸಲು ಪೂರಕವಾದ ಸಂಸ್ಕೃತಿಯಾಗಿದ್ದು, ಇದು ಇತರರು ತಮ್ಮನ್ನು ಲಾಭಕ್ಕಾಗಿ ಬಳಸಿಕೊಳ್ಳುತ್ತಿದ್ದಾರೆ ಅಥವಾ ತಮ್ಮನ್ನು ಮೂಲೆಗುಂಪು ಮಾಡಲಾಗಿದೆ ಎಂಬ ಭಾವನೆ ಬರದೇ ಇದ್ದಾಗ ಮಾತ್ರ ಸಾಧ್ಯ ಎಂಬುದು ಎಮೀಲ್ ಡರ್ಖೈಮ್ ಅವರ ಅಭಿಪ್ರಾಯವಾಗಿದೆ.

ಹಲವಾರು ಸಮಾಜಶಾಸ್ತ್ರಜ್ಞರು ವಿವಿಧ ಗುಂಪುಗಳ ಪ್ರದೇಶಗಳ ಮತ್ತು ಸಮುದಾಯಗಳ ನಡುವೆ ಈ ಬಾಂಧವ್ಯದ ಭಾವನೆಯನ್ನು ಮೂಡಿಸುವುದು ಶಾಲೆಗಳ ಪ್ರಮುಖ ಕಾರ್ಯವಾಗಿದೆ ಎಂದು ವಾದಿಸಿದ್ದಾರೆ. ಶಾಲೆಯು ವಿವಿಧ ಸಾಮಾಜಿಕ ಹಿನ್ನೆಲೆಯಿಂದ ಬಂದಂತಹ ಮಕ್ಕಳು ವಿಶಾಲ ಪ್ರಪಂಚದ ಬಗ್ಗೆ ತಿಳಿಯಲು ಬರುವ ಸ್ಥಳವಾಗಿದೆ. ಆದ್ದರಿಂದ, ಇಲ್ಲಿ ಜೈವಿಕ ಐಕ್ಯತೆಯ ಸಂಸ್ಕೃತಿಯನ್ನು ಹುಟ್ಟುಹಾಕಬಹುದಾಗಿದೆ. ಈ ಕಾರಣಕ್ಕಾಗಿಯೇ ಎಮೀಲ್ ಡರ್ಖೈಮ್‌ರಂತಹವರು ಶಾಲೆಗಳಿಗೆ ಮಾರ್ಗದರ್ಶನ ನೀಡುವಲ್ಲಿ ಸರ್ಕಾರದ ವಿಶೇಷ ಪಾತ್ರವಿದೆ ಎಂದು ವಾದಿಸಿದ್ದರು. ಒಂದು ವೇಳೆ ಶಾಲೆಗಳು ಕೇವಲ ಒಂದು ಸಮುದಾಯ ಅಥವಾ ಒಂದು ಸಾಮಾಜಿಕ ವರ್ಗದಿಂದ ನಡೆಸಲ್ಪಟ್ಟರೆ, ಆಗ ಅದು ಕೇವಲ ತನ್ನ ಗುಂಪಿನ ದೃಷ್ಟಿಕೋನವನ್ನು ಮಾತ್ರ ಕಲಿಸಲು ಒಲವು ತೋರಿಸಬಹುದು. ನಿರ್ದಿಷ್ಟ ಪ್ರದೇಶ ಅಥವಾ ಧರ್ಮ ಅಥವಾ ಗುಂಪಿನ ಪ್ರಾಬಲ್ಯಕ್ಕೆ ಒಳಗಾದ ಸಂಸ್ಕೃತಿಯು ಜೈವಿಕ ಐಕ್ಯತೆಯನ್ನು ಮೂಡಿಸಲಾರದು. ಇದು ಇತರರ ಮೇಲೆ ಅಸಮಾಧಾನವನ್ನು ಹೇರುವುದರಿಂದ ಜನರನ್ನು ಒಗ್ಗೂಡಿಸುವಲ್ಲಿ ವಿಫಲವಾಗುತ್ತದೆ. ಸರ್ಕಾರವು ಎಲ್ಲಾ ಗುಂಪುಗಳ ಸಹಭಾಗಿತ್ವವನ್ನು ಹೊಂದಿರುವ ಸಂಸ್ಥೆಯಾಗಿದ್ದು ಎಲ್ಲರನ್ನು ಒಗ್ಗೂಡಿಸುವ ಸಾರ್ವತ್ರಿಕ ಸಂಸ್ಥೆಯಾಗಿದೆ. ಆದ್ದರಿಂದ ಸೂಕ್ತ ಜೈವಿಕ ಸಂಸ್ಕೃತಿಯ ನಿರ್ಮಾಣವನ್ನು ಖಾತ್ರಿಪಡಿಸಿಕೊಳ್ಳುವುದು ಸರ್ಕಾರದ ಜವಾಬ್ದಾರಿಯಾಗಿದ್ದು, ಏನನ್ನು ಕಲಿಸಬೇಕು ಎಂದು ನಿರ್ಧರಿಸುವ ಮುಖ್ಯ ಜವಾಬ್ದಾರಿಯನ್ನು ಯಾವುದೇ ಒಂದು ಗುಂಪಿಗೆ ವಹಿಸಬಾರದು. ಅಷ್ಟೇ ಅಲ್ಲದೇ, ಇದಕ್ಕಾಗಿ ಸ್ವತಃ ಸರ್ಕಾರವು ಪ್ರಜಾಪ್ರಭುತ್ವಕ ಹಾಗೂ ನಿಷ್ಪಕ್ಷಪಾತವಾಗಿ ಇದ್ದು ವಿಭಿನ್ನ ದೃಷ್ಟಿಕೋನಗಳಿಗೆ ಅವಕಾಶ ನೀಡುವುದರೊಂದಿಗೆ ಅವುಗಳ ನಡುವೆ ಹೊಂದಾಣಿಕೆಯನ್ನು ಮಾಡುವ ಜವಾಬ್ದಾರಿಯನ್ನು ಹೊಂದಿರಬೇಕಾಗುತ್ತದೆ.

**ವ್ಯಕ್ತಿಪ್ರಧಾನವಾದ, ಸಾಮಾಜಿಕ ವ್ಯತ್ಯಾಸಗಳು ಮತ್ತು ಶಿಕ್ಷಣ**

ಹೆಚ್ಚು ಸಂಕೀರ್ಣವಾದ ಸಮಾಜಗಳಲ್ಲಿ ಜನರು ಹೆಚ್ಚು ವ್ಯಕ್ತಿ ಪ್ರಧಾನರಾಗುವುದು ಅನಿವಾರ್ಯವೆಂದು ಎಮೀಲ್ ಡರ್ಖೈಮ್ ಮತ್ತು ಇತರ ಅನೇಕ ಸಮಾಜಶಾಸ್ತ್ರಜ್ಞರು ನಂಬಿದ್ದರು. ಸಣ್ಣ ಪ್ರಮಾಣದ ಸಮಾಜಗಳಲ್ಲಿ ಸಾಮೂಹಿಕ ಗುರುತಿಸುವಿಕೆಯ ಪ್ರಜ್ಞೆ ಹಾಗೂ ಒಂದು ಕುಟುಂಬದ ಮತ್ತು ಸಮುದಾಯದ ಭಾಗವೆನ್ನುವ ಭಾವನೆಯನ್ನು ಗೌರವಿಸಲಾಗುತ್ತದೆ. ಆದರೆ, ಸಮಾಜಗಳು ದೊಡ್ಡ ಪ್ರಮಾಣದವುಗಳಾದಂತೆಲ್ಲ ಜನರು ತಮ್ಮ ಪೋಷಕರು

ಹಿಂದೆಂದೂ ಎದುರಿಸದೇ ಇರುವ ವೈವಿಧ್ಯಮಯ ಸನ್ನಿವೇಶಗಳೊಂದಿಗೆ ವ್ಯವಹರಿಸಬೇಕಾಗುತ್ತದೆ. ಆದ್ದರಿಂದ, ಅವರು ತಮ್ಮ ಕೆಲವು ಸಾಮುದಾಯಿಕ ಬಾಂಧವ್ಯಗಳಿಂದ ಹಿಂದೆ ಸರಿಯುವುದು ಅನುಕೂಲಕರವಾಗಿರುತ್ತದೆ. ಉದಾಹರಣೆಗೆ, ಹಲವಾರು ವಿದ್ಯಾರ್ಥಿಗಳು ಪ್ರಯಾಣ ಮಾಡಬೇಕಾಗುತ್ತದೆ ಹಾಗೂ ತಮ್ಮ ಕುಟುಂಬಗಳಿಂದ ದೂರವಾಗಿ ವಿದ್ಯಾರ್ಥಿ ವಸತಿನಿಲಯಗಳಲ್ಲಿ ವಾಸಮಾಡಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ, ಅವರು ಭಾವನಾತ್ಮಕ ಬೆಂಬಲ ಮತ್ತು ಮಾರ್ಗದರ್ಶನಕ್ಕಾಗಿ ತಮ್ಮ ಮನೆಗೆ ಪದೇ ಪದೇ ಓಡಿಹೋಗದೇ ತಮ್ಮ ಜೀವನವನ್ನು ತಾವೇ ನಿಭಾಯಿಸಬಲ್ಲೆವು ಎಂಬ ಭಾವನೆ ಬೆಳೆಸಿಕೊಳ್ಳುವುದು ಅಗತ್ಯ. ಹೀಗಿಲ್ಲದೆ ಒಬ್ಬ ವಿದ್ಯಾರ್ಥಿಯು ಮನೆಯಲ್ಲಿ ಒಟ್ಟಿಗೆ ಆಚರಿಸಲಾಗುವ ಪ್ರತಿಯೊಂದು ಹಬ್ಬಹರಿದಿನಕ್ಕೂ ತರಗತಿಗಳನ್ನು ಬಿಟ್ಟು ಹೋಗಿ ಬರುತ್ತಿದ್ದರೆ ಅವನು ಹೆಚ್ಚು ಕಲಿಯಲು ಸಾಧ್ಯವಾಗುವುದಿಲ್ಲ. ಒಂದೆಡೆ ಕುಟುಂಬದೊಂದಿಗಿನ ಭಾವನಾತ್ಮಕ ಸಂಬಂಧವು ಪ್ರಶಂಸಾರ್ಹವಾದರೂ, ಸಂಕೀರ್ಣ ಸಮಾಜಗಳಲ್ಲಿ ಅವರು ತಮ್ಮಷ್ಟಕ್ಕೆ ತಾವು ಕೆಲಸ ಮಾಡುವುದು ಮತ್ತು ಜೀವನ ಮಾಡುವುದನ್ನೂ ಕಲಿಯುವುದು ಅಪೇಕ್ಷಣೀಯ. ಅಂತೆಯೇ, ಸ್ವಂತವಾಗಿ ಆಲೋಚನೆ ಮಾಡುವುದನ್ನು ಕಲಿಯುವುದೂ ಸಹ ಅಗತ್ಯ. ಸಂಕೀರ್ಣ ಸಮಾಜಗಳಲ್ಲಿನ ಪಾತ್ರಗಳು ಜನರು ಸ್ವತಂತ್ರರಾಗಿ ತಮ್ಮ ಕೆಲಸವನ್ನು ತಾವೇ ಮೌಲೀಕರಿಸುವುದು ಮತ್ತು ತಿಳಿವಳಿಕೆಯುಳ್ಳ ನಿರ್ಧಾರಗಳನ್ನು ಶೀಘ್ರವಾಗಿ ಕೈಗೊಳ್ಳುವ ಸಾಮರ್ಥ್ಯವನ್ನು ಅಪೇಕ್ಷಿಸುತ್ತವೆ. ಅಂದರೆ, ವಿದ್ಯಾರ್ಥಿಗಳು ಸ್ವಾವಲಂಬಿಗಳಾಗಿರಬೇಕು ಹಾಗೂ ಬಹುಮತಕ್ಕಿಂತ ಭಿನ್ನವಾದ ನಿರ್ಧಾರಗಳನ್ನು ಕೈಗೊಳ್ಳುವಲ್ಲಿ ಧೈರ್ಯವಿರಬೇಕೆಂದು ನಿರೀಕ್ಷಿಸುತ್ತವೆ. ವ್ಯಕ್ತಿಪ್ರಧಾನವಾದವು ಸಂಕೀರ್ಣ ಸಮಾಜಗಳಿಗೆ ಒಂದು ಅಮೂಲ್ಯವಾದ ಲಕ್ಷಣವಾಗಿದ್ದು, ಜನರನ್ನು ತಮ್ಮ ಕಾರ್ಯಗಳಲ್ಲಿ ಹೆಚ್ಚು ಕ್ರಿಯಾಶೀಲ ಹಾಗೂ ಹೊಂದಾಣಿಕೆಯುಳ್ಳವರನ್ನಾಗಿ ಮಾಡುತ್ತದೆ.

ಶತಮಾನಗಳು ಕಳೆದಂತೆ ಹಲವಾರು ದೇಶಗಳು ನೂರಾರು ದಶಲಕ್ಷ (ಮಿಲಿಯನ್) ಜನರೊಂದಿಗೆ ಬೃಹತ್ ಗಾತ್ರದವುಗಳಾಗಿರುವುದನ್ನು ಕಾಣುತ್ತಿದ್ದೇವೆ. ಇವೆಲ್ಲವೂ ಜನರಲ್ಲಿ ಒಗ್ಗಟ್ಟಿನ ಭಾವನೆ ಮತ್ತು ಜೈವಿಕ ಐಕ್ಯತೆಯನ್ನು ಮೂಡಿಸುವ ಸವಾಲನ್ನು ಎದುರಿಸುತ್ತಿವೆ. ಕೆಲವು ದೇಶಗಳು ನಿರ್ದಿಷ್ಟ ಸಮುದಾಯ ಅಥವಾ ಪ್ರಾದೇಶಿಕ ಸಂಸ್ಕೃತಿಯನ್ನು ಉಳಿದವರೆಲ್ಲರ ಮೇಲೆ ಒತ್ತಾಯಪೂರ್ವಕವಾಗಿ ಹೇರುವ ಮೂಲಕ ಸ್ಪಂದಿಸಿದ್ದರೆ ಇನ್ನೂ ಕೆಲವು ದೇಶಗಳು ಹೆಚ್ಚು ಬಳಸಾದ ವಿಧಾನವನ್ನು ಅಳವಡಿಸಿಕೊಂಡಿವೆ. ಸುಸಂಬಂದ್ಧವಾದ ಸಮಾಜವನ್ನು ಕಟ್ಟಲು ಅವರು ಬಳಸುವ ಕಾರ್ಯತಂತ್ರಗಳಲ್ಲಿ ಶಿಕ್ಷಣವು ಕೇಂದ್ರಬಿಂದುವಾಗಿದೆ. ಜನರು ತಮ್ಮ ಸಮಾಜದಲ್ಲಿನ ನ್ಯಾಯ ವ್ಯವಸ್ಥೆಯಲ್ಲಿ ನಂಬಿಕೆ ಇಟ್ಟಾಗ ಮಾತ್ರ ಜೈವಿಕ ಐಕ್ಯತೆ ಕಾರ್ಯಸಾಧು ಆಗುತ್ತದೆ ಎನ್ನುವ ಸಮಸ್ಯೆಯನ್ನು ಇವರೆಲ್ಲರೂ ಎದುರಿಸುತ್ತಿದ್ದಾರೆ.

ಕಾರ್ಯತ್ಮಕವಾದಿಗಳೆಂದು (functionalists) ಕರೆಯಲ್ಪಡುವ ಸಮಾಜಶಾಸ್ತ್ರಜ್ಞರ ಗುಂಪೊಂದು ನಿರ್ದಿಷ್ಟವಾಗಿ ಹೇಗೆ ಸಮಾಜಗಳು ಸುಸಂಬದ್ಧವಾಗಿರುತ್ತವೆ ಮತ್ತು ಬದುಕುಳಿಯುತ್ತವೆ ಎಂಬುದರ ಬಗ್ಗೆ ಆಸಕ್ತಿ ಹೊಂದಿದ್ದಾರೆ. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ, ಸಮಾಜವು ಬೆಳೆಯಲು ಹೇಗೆ ಸಮಾಜದ ವಿವಿಧ ಭಾಗಗಳು ಮತ್ತು ಅಂಶಗಳು

ಕಾರ್ಯನಿರ್ವಹಿಸುತ್ತವೆ ಎಂಬುದರಲ್ಲಿ ಉದಾಹರಣೆಗೆ, ಎಮೀಲ್ ಡರ್ಖೈಮ್, ಟಾಲ್ಕಾಟ್ ಪಾರ್ಸನ್ಸ್ (Talcott Parsons) ಮತ್ತು ಎಂ.ಎನ್. ಶ್ರೀನಿವಾಸ್ (M.N. Srinivas) ಮುಂತಾದ ಸಮಾಜಶಾಸ್ತ್ರಜ್ಞರು ಆಸಕ್ತಿ ಹೊಂದಿದ್ದಂತವರು. ಹೇಗೆ ಶಿಕ್ಷಣ ಮತ್ತು ಸಂಸ್ಕೃತಿಯು ಸಂಕೀರ್ಣ ಸಮಾಜಗಳು ಒಗ್ಗಟ್ಟಾಗಿರಲು ಹಾಗೂ ತಮ್ಮ ಸಮಸ್ಯೆಗಳನ್ನು ಪರಿಹರಿಸಲು ಸಹಾಯಕವಾಗಿವೆ ಎಂಬುದು ಇಂಥ ಸಮಾಜಶಾಸ್ತ್ರದ ವಿಶಿಷ್ಟ ಆಸಕ್ತಿಯಾಗಿದೆ. ಆದಾಗ್ಯೂ, ಸಮಾಜಗಳು ಹಲವಾರು ಆಂತರಿಕ ಒತ್ತಡಗಳು ಮತ್ತು ಸಂಘರ್ಷಗಳನ್ನು ಹೊಂದಿರುತ್ತವೆ ಎಂಬುದೂ ಅಷ್ಟೇ ಸತ್ಯ.

ಈ ಸರಣಿಯ ನಮ್ಮ ಮುಂದಿನ ಲೇಖನದಲ್ಲಿ ನಾವು ಸಮಾಜದಲ್ಲಿನ ಘರ್ಷಣೆಗಳನ್ನು ಪರಿಗಣಿಸೋಣ, ವಿಶೇಷವಾಗಿ ನಮ್ಮ ಬದಲಾಗುತ್ತಿರುವ ಆರ್ಥಿಕತೆಯಿಂದಾಗುತ್ತಿರುವ ಸಂಘರ್ಷಗಳು ಮತ್ತು ಅವು ಶಿಕ್ಷಣಕ್ಕೆ ಒಡ್ಡುವ ಸವಾಲುಗಳು.

***

ಮೂಲ: ಇಂಗ್ಲಿಷ್ ಆವೃತ್ತಿ: ಮದನ್.ಎ (2014). ಜಟಿಲ್ ಸಮಾಜೋ ಮೇ ಶಿಕ್ಷಾ
(Jatil Samajon Mein Shiksha) ಶಿಕ್ಷಾ ವಿಮರ್ಶಾ (*Shiksha Vimarsh*), 16(5), 4-

ವಿರೋಧಾಭಾಸಗಳನ್ನು ಸಮನ್ವಯಗೊಳಿಸುವಲ್ಲಿ ಸಂಸ್ಕೃತಿಯ ಪಾತ್ರವನ್ನು ಮತ್ತು ನಿಯಮರಾಹಿತ್ಯತೆಯ (anomie) ಪರಿಕಲ್ಪನೆಗಳನ್ನು ಸೇರಿಸಿ.

**ಚೌಕಟ್ಟು:** ಆಧುನೀಕರಣ ಕುರಿತ ಸಿದ್ಧಾಂತದ ವಿಮರ್ಶೆಯು ಸಣ್ಣ ಶಾಲೆಗಳನ್ನು ಉತ್ತೇಜಿಸಲು ಒತ್ತು ನೀಡುತ್ತದೆ. ಹೆಚ್ಚುತ್ತಿರುವ ಅಸ್ಮಿತೆ (identity) ಆಧಾರಿತ ಗುಂಪುಗಳ ಸಮಸ್ಯೆಗಳನ್ನು ಅರ್ಥೈಸಿಕೊಳ್ಳುವುದು ಹೇಗೆ -ಹೆಚ್ಚಾಗುತ್ತಿರುವ ಜಟಿಲತೆಯನ್ನು ಬಗೆಹರಿಸಿಕೊಳ್ಳುವ ದಾರಿಯಾಗಿ ಧಾರ್ಮಿಕ ಮತ್ತು ರಾಷ್ಟ್ರೀಯತೆಯ ಅಸ್ಮಿತೆಯನ್ನು ಒಪ್ಪಿಕೊಳ್ಳುವುದಾಗಿದೆ.

**Suggested Readings**


Madan, Amman. "Emile Durkheim on Moral Education." *Contemporary Education Dialogue* 7, no.2 (2010): 225-48.

Ramanujan, A.K. "Is There an Indian Way of Thinking? An Informal Essay." *Contributions to Indian Sociology, N.s.* 23, no. 41 (1989): 41-58.

Saberwal, Satish. *Roots of Crisis: Interpreting Contemporary Indian Society*. New Delhi; Thousand Oaks: Sage Publications, 1996.


***